## ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 143 (114)

2) ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3) ಉತ್ತರಿಸುವ ದಿನಾಂಕ : 21-09-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜನವರಿ-2020 ರಿಂದ ಮೈಸೂರು-ಚಾಮರಾಜನಗರ ಜಿಲ್ಲೆಯ ಅರಣ್ಯ ಪ್ರದೇಶದಲ್ಲಿ, ವನ್ಯಜೀವಿ ದಾಳಿಯಿಂದ ಮೃತಪಟ್ಟ ಹಾಗೂ ಗಾಯಗೊಂಡವರ ಸಂಖ್ಯೆ ಎಷ್ಟು; ರೈತಾಪಿ ಜನರಿಗೆ ಸೇರಿದ ಎಷ್ಟು ಜಾನುವಾರುಗಳು (ಹಸು, ಎತ್ತು, ಎಮ್ಮೆ, ಆಡು, ಕುರಿ) ಮೃತಪಟ್ಟಿರುತ್ತವೆ; ಇವರಿಗೆ ಪರಿಹಾರದ ಹಣ ವಿತರಣೆ ಮಾಡಲಾಗಿದೆಯೇ; (ವಿವರ ಒದಗಿಸುವುದು) | ಜನವರಿ - 2020 ರಿಂದ ಮೈಸೂರು-ಚಾಮರಾಜನಗರ ಜಿಲ್ಲೆಗಳ ವ್ಯಾಪ್ತಿಯಲ್ಲಿ ವನ್ಯಪ್ರಾಣಿ ದಾಳಿಯಿಂದ ಉಂಟಾಗಿರುವ ಮಾನವ-ಪ್ರಾಣ ಹಾನಿ ಹಾಗೂ ಮಾನವ-ಗಾಯ ಪ್ರಕರಣಗಳು ಈ ಕೆಳಕಂಡಂತಿವೆ. |

| ಕ್ರ ಸಂ | ಜಿಲ್ಲೆ | ಮಾನವ-ಪ್ರಾಣ ಹಾನಿ | | ಮಾನವ-ಗಾಯ | |
|---|---|---|---|---|---|
| | | ಪ್ರಕರಣ | ಪಾವತಿಸಿದ ಮೊತ್ತ | ಪ್ರಕರಣ | ಪಾವತಿಸಿದ ಮೊತ್ತ |
| 1 | ಮೈಸೂರು | 02 | 15,00,000 | - | - |
| 2 | ಚಾಮರಾಜನಗರ | 01 | - | 12 | 1,85,000 |

* ಮಲೈ ಮಹದೇಶ್ವರ ವನ್ಯಜೀವಿ ವಿಭಾಗ ಹೂಗ್ಯಂ ವನ್ಯಜೀವಿ ವಲಯ ವ್ಯಾಪ್ತಿಯ ಯರ್‍ರಂಬಾಡಿ ಗ್ರಾಮದ ಶ್ರೀ ಚೆನ್ನೇಗೌಡ ಬಿನ್ ಬಸವೇಗೌಡ ಎಂಬುವವರು ದಿನಾಂಕ: 16.08.2020 ರಂದು ಕಾಡಾನೆ ದಾಳಿಯಿಂದ ಮೃತಪಟ್ಟಿರುವುದಾಗಿ ಮೇಲ್ನೋಟಕ್ಕೆ ಕಂಡು ಬಂದಿದ್ದು, ಈ ಬಗ್ಗೆ ಕ್ರಮ ಕೈಗೊಳ್ಳಲು ಪರಿಶೀಲಿಸಲಾಗುತ್ತಿದೆ.

ರೈತಾಪಿ ಜನರಿಗೆ ಸೇರಿದ ಸಾಕುಪ್ರಾಣಿಗಳ ಹತ್ಯೆ ಹಾಗೂ ಪರಿಹಾರದ ಹಣ ವಿತರಣೆಯ ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ಜಿಲ್ಲೆ | ಸಾಕುಪ್ರಾಣಿ ಹತ್ಯೆ (ಹಸು, ಎತ್ತು, ಎಮ್ಮೆ, ಆಡು, ಕುರಿ) | |
|---|---|---|---|
| | | ಪ್ರಕರಣ | ಮೊತ್ತ (ರೂ.ಗಳಲ್ಲಿ) |
| 1 | ಮೈಸೂರು | 271 | 12,01,500.00 |
| 2 | ಚಾಮರಾಜನಗರ | 214 | 14,56,750.00 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಸದರಿ ಅವಧಿಯಲ್ಲಿ ಈ ಅರಣ್ಯದಲ್ಲಿ ನಡೆದಿರುವ ಕಳ್ಳಬೇಟೆ ಪ್ರಕರಣಗಳು ವರದಿಯಾಗಿದೆಯೇ; ಎಷ್ಟು ವನ್ಯಜೀವಿಗಳು ಮೃತಪಟ್ಟಿವೆ; ಕಳ್ಳಬೇಟೆಗಾರರನ್ನು ಬಂದಿಸಲಾಗಿದೆಯೇ; ಈ ಕಳ್ಳಬೇಟೆ ಪ್ರಕರಣಗಳ ಹಿಂದಿರುವ ಜಾಲವನ್ನು ಬೇಧಿಸಲು ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? | ಹೌದು. |

ಕಳ್ಳಬೇಟೆ ಪ್ರಕರಣಗಳಲ್ಲಿ ಮೃತಪಟ್ಟ ವನ್ಯಜೀವಿಗಳು ಹಾಗೂ ಬಂಧಿತ ಆರೋಪಿಗಳ ವಿವರ ಸಂಖ್ಯೆ ಈ ಕೆಳಕಂಡಂತಿದೆ.

| ಕ್ರ ಸಂ | ಜಿಲ್ಲೆ | ಕಳ್ಳಬೇಟೆ ಪ್ರಕರಣಗಳ ಸಂಖ್ಯೆ | ಕಳ್ಳಬೇಟೆ ಮಾಡಿರುವ ವನ್ಯಪ್ರಾಣಿಗಳ ಸಂಖ್ಯೆ | ಬಂಧಿಸಿರುವ ಆರೋಪಿಗಳ ಸಂಖ್ಯೆ |
|---|---|---|---|---|
| 1 | ಮೈಸೂರು | 04 | 09 | 09 |
| 2 | ಚಾಮರಾಜನಗರ | 21 | 20 | 56 |

ಕಳ್ಳಬೇಟೆ ಪ್ರಕರಣಗಳ ಹಿಂದಿರುವ ಜಾಲಗಳನ್ನು ಭೇದಿಸಲು ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿದೆ:-

- ರಾಜ್ಯದ ಸೂಕ್ಷ್ಮ ಅರಣ್ಯ ಪ್ರದೇಶಗಳಲ್ಲಿ ಕಳ್ಳಬೇಟೆ ತಡೆ ಶಿಬಿರಗಳನ್ನು ರಚಿಸಲಾಗಿದ್ದು, ಅದರಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗೆ ವಾಕಿ-ಟಾಕಿ, ಟಾರ್ಚ್ ಅವಶ್ಯವಿರುವ ಉಪಕರಣಗಳನ್ನು ನೀಡಿ, ನಿರಂತರ ಪಹರೆ ತಿರುಗಲು ಸೂಚನೆ ನೀಡಲಾಗುತ್ತದೆ.
- ಕೆಲವೊಂದು ಸ್ಥಳೀಯ ಜನರನ್ನು ನೇಮಿಸಿಕೊಂಡು ಗುಪ್ತಚರ ಮಾಹಿತಿಗಳ ಸಂಗ್ರಹಣೆ ಮಾಡಿಕೊಳ್ಳಲು ಇಲಾಖಾ ವತಿಯಿಂದ Secret Service ಸೇವೆಯಡಿ ಪರಿಗಣಿಸಿ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ.
- ವನ್ಯಪ್ರಾಣಿ ಬೇಟೆಯಾಡಿರುವ ಪ್ರಕರಣಗಳಲ್ಲಿ ಆರೋಪಿಗಳನ್ನು ಪತ್ತೆ ಹಚ್ಚಲು ಶ್ವಾನದಳ ನಿಯೋಜನೆ ಮಾಡಿಕೊಳ್ಳಲಾಗುತ್ತಿದೆ.
- ವನ್ಯಜೀವಿ ಅಪರಾಧ ಪ್ರಕರಣಗಳಲ್ಲಿ ದಸ್ತಗಿರಿ ಮಾಡಲಾಗುವ ಆರೋಪಿಗಳ Modus Operandi Bureau (MOB) ಮಾಹಿತಿಯನ್ನು ಸಂಗ್ರಹಿಸಿ, ಕಾಲಕ್ರಮೇಣ ಅವರ ಚಲನವಲನಗಳ ಮೇಲೆ ನಿಗಾವಹಿಸಲಾಗುತ್ತದೆ.
- ಒಂದಕ್ಕಿಂತ ಹೆಚ್ಚು ಅರಣ್ಯ ಅಪರಾಧಗಳಲ್ಲಿ ಭಾಗಿಯಾಗಿರುವ ಆರೋಪಿಗಳನ್ನು ಗುರುತಿಸಿ ಅವರ Call Detail Record (CDR) ಆಧಾರದ ಮೇಲೆ ಭಾಗಿಯಾಗಿರಬಹುದಾದ ಆರೋಪಿಗಳನ್ನು ಪತ್ತೆ ಹಚ್ಚಲಾಗುತ್ತದೆ.
- ಅಲ್ಲದೇ ವನ್ಯಜೀವಿ ಅಪರಾಧ ಪ್ರಕರಣಗಳನ್ನು ಭೇದಿಸಲು ವಿಧಿವಿಜ್ಞಾನ ಪ್ರಯೋಗಾಲಯ (Forensic lab) ವರದಿ ಆಧಾರದ ಮೇಲೆ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತದೆ.

ಸಂಖ್ಯೆ: ಅಪಜೀ 139 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು